**ಕರ್ನಾಟಕ ವಿಧಾನ ಪರಿಷತ್ತು**

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 561 |
| 2 | ಸದಸ್ಯರ ಹೆಸರು | : | ಶ್ರೀ ಲಹರ್ ಸಿಂಗ್ ಸಿರೋಯಾ (ವಿಧಾನ ಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸುವ ದಿನಾಂಕ | : | 16-09-2021 |
| 4 | ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದ ರಸ್ತೆ ಬದಿಯಲ್ಲಿ ಅಕ್ರಮವಾಗಿ ಅಳವಡಿಸಿರುವ ಕೇಬಲ್ ವೈರ್‌ಗಳನ್ನು ತೆರವುಗೊಳಿಸುವಂತೆ ಉಚ್ಚ ನ್ಯಾಯಾಲಯವು ಸೂಚಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಅಕ್ರಮವಾಗಿ ಅಳವಡಿಸಿರುವ ಕೇಬಲ್ ವೈರ್‌ಗಳನ್ನು ತೆರವುಗೊಳಿಸಲು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಯಾವ ಕ್ರಮಕೈಗೊಂಡಿದೆ? (ಪೂರ್ಣ ವಿವರವನ್ನು ಒದಗಿಸುವುದು) | ಈವರೆವಿಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿನ ಪಾದಚಾರಿ ಮಾರ್ಗ ಮತ್ತು ಬೀದಿಗಳಲ್ಲಿ ತೂಗಾಡುತ್ತಿದ್ದ 917.07 ಕಿ.ಮೀ ಉದ್ದದ ಅನಧಿಕೃತ ಟಿವಿ ಕೇಬಲ್ ಮತ್ತು ಓ.ಎಫ್.ಸಿ ಕೇಬಲ್‌ಗಳನ್ನು ತೆರವುಗೊಳಿಸಲಾಗಿದೆ.<br><br>ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗಿದ್ದ, ಸಾರ್ವಜನಿಕರ ಹಿತಾಸಕ್ತಿ ಅರ್ಜಿ ಸಂಖ್ಯೆ: 15291/2020ರ ಮೇಲೆ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ: 03-08-2021 ರಂದು ನೀಡಿರುವ ಆದೇಶದಲ್ಲಿ, ನಗರದ ಪಾದಚಾರಿ ಮಾರ್ಗ ಮತ್ತು ಬೀದಿಗಳಲ್ಲಿ ತೂಗಾಡುತ್ತಿರುವ ಎಲ್ಲಾ ಅನಧಿಕೃತ ಕೇಬಲ್‌ಗಳನ್ನು ತೆರವುಗೊಳಿಸಲು ಕೇಬಲ್ ಟಿ.ವಿ. ಆಪರೇಟರ್ ಮತ್ತು ಇಂಟರ್‌ನೆಟ್ ಪೂರೈಕೆದಾರ ಕಂಪನಿಗಳಿಗೆ ಒಂದು ತಿಂಗಳ ಕಾಲಾವಕಾಶ ನೀಡಲು ನೋಟೀಸ್ ನೀಡಿ, ನೋಟೀಸ್ ನೀಡಿದ ಒಂದು ತಿಂಗಳ ಬಳಿಕೆ ತೆರವುಗೊಳಿಸದೇ ಉಳಿದಿರುವ ಎಲ್ಲಾ ಅನಧಿಕೃತ ಕೇಬಲ್‌ಗಳನ್ನು ತೆಗೆದುಹಾಕಲು ಕಾರ್ಯಚರಣೆ ತೀವ್ರಗೊಳಿಸಬೇಕೆಂದು ಆದೇಶಿಸಿರುವುದರಿಂದ, ಈ ಕುರಿತು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ ಸಂಖ್ಯೆ: ಪಿಎಸ್‌ಆರ್(ಜಿ)2151/21-22, ದಿನಾಂಕ: 23-08-2021 ರಂದು ಸಾರ್ವಜನಿಕ ಪ್ರಕಟಣೆ ಹೊರಡಿಸಲಾಗಿದೆ. |

**ನಅಇ 311 ಎಂಎನ್‌ಯು 2021**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ